# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 669 |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರದಿಂದ ಚುನಾಯಿತರಾದವರು) |
| ವಿಷಯ | : | ರಾಜ್ಯದ ಒಳಗೆ ಮತ್ತು ಹೊರಗೆ ಇರುವ ಪ್ರವಾಸಿಮಂದಿರ ಮತ್ತು ಕರ್ನಾಟಕ ಭವನಗಳ ಬಗ್ಗೆ. |
| ಉತ್ತರಿಸುವ ಸಚಿವರು | : | ಪ್ರವಾಸೋದ್ಯಮ ಮತ್ತು ರೇಷ್ಮೆ ಸಚಿವರು |
| ಉತ್ತರಿಸುವ ದಿನಾಂಕ: | : | 22-07-2019. |

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| (1) | (2) | (3) |
| ಅ) | ರಾಜ್ಯದ ಒಳಗೆ ಮತ್ತು ಹೊರಗೆ ಇರುವ ಪ್ರಮುಖ ಪ್ರವಾಸಿ ತಾಣಗಳಿಗೆ ಸರ್ಕಾರದ ವತಿಯಿಂದ ನಿರ್ಮಾಣವಾದ ಪ್ರವಾಸಿ ಮಂದಿರ ಮತ್ತು ಕರ್ನಾಟಕ ಭವನಗಳಲ್ಲಿ ಅಗತ್ಯ ಮೂಲ ಸೌಲಭ್ಯಗಳ ಮತ್ತು ಸಿಬ್ಬಂದಿಗಳ ಕೊರತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ ಈ ಬಗ್ಗೆ ಸರ್ಕಾರ ತೆಗೆದುಕೊಂಡ ಕ್ರಮಗಳೇನು; (ವಿವರವಾದ ಮಾಹಿತಿ ನೀಡುವುದು) | ಪ್ರವಾಸಿ ಮಂದಿರ ಮತ್ತು ಕರ್ನಾಟಕ ಭವನಗಳ ನಿರ್ಮಾಣ ಪ್ರವಾಸೋದ್ಯಮ ಇಲಾಖೆಯ ವ್ಯಾಪ್ತಿಗೆ ಬರುವುದಿಲ್ಲ. ಇಲಾಖೆಯು ಯಾತ್ರಿನಿವಾಸ ಹಾಗೂ ಡಾರ್ಮಿಟರಿಗಳನ್ನು ನಿರ್ಮಾಣ ಮಾಡಿ, ನಂತರ ಅವುಗಳನ್ನು ಸಂಬಂಧಪಟ್ಟ ಟ್ರಸ್ಟ್‌ಗಳು, ದೇವಸ್ಥಾನದ ಆಡಳಿತ ಮಂಡಳಿಗಳು ವಹಿಸಿಕೊಡುವ ಪದ್ಧತಿಯಿದ್ದು, ನಿರ್ವಹಣೆಗೆ ಆಯಾ ಸಂಘ ಸಂಸ್ಥೆಗಳದ್ದಾಗಿರುತ್ತದೆ. |
| ಆ) | ಮಂಡ್ಯ ಜಿಲ್ಲೆ ವ್ಯಾಪ್ತಿಯ ವಿವಿಧ ಪ್ರವಾಸಿ ತಾಣಗಳಲ್ಲಿ ಈವರೆವಿಗೆ ಎಷ್ಟು ಯಾತ್ರಿ ನಿವಾಸಗಳನ್ನು ನಿರ್ಮಾಣ ಮಾಡಲಾಗಿದೆ; (ತಾಲ್ಲೂಕುವಾರು ವಿವರವಾದ ಮಾಹಿತಿ ನೀಡುವುದು) ಕಾಮಗಾರಿ ಅಪೂರ್ಣಗೊಂಡಿರುವ ಯಾತ್ರಿ ನಿವಾಸಗಳ ಸಂಖ್ಯೆ ಎಷ್ಟು? ಕಾಮಗಾರಿ ವಿಳಂಭಕ್ಕೆ ಕಾರಣವೇನು; | ಮಂಡ್ಯ ಜಿಲ್ಲೆ ವ್ಯಾಪ್ತಿಯ ವಿವಿಧ ಪ್ರವಾಸಿ ತಾಣಗಳಲ್ಲಿ ಈವರೆಗೆಒಟ್ಟು 10 ಯಾತ್ರಿನಿವಾಸ/ಡಾರ್ಮಿಟರಿಗಳನ್ನು ನಿರ್ಮಾಣ ಮಾಡಲಾಗಿದೆ.<br><br>ತಾಲ್ಲೂಕುವಾರು ವಿವರವಾದ ಮಾಹಿತಿಯನ್ನು ಅನುಬಂಧ-1 ರಲ್ಲಿ ನೀಡಿದೆ.<br><br>ಮಂಡ್ಯ ಜಿಲ್ಲೆಯಲ್ಲಿ ಯಾವುದೇ ಯಾತ್ರಿನಿವಾಸ ಕಾಮಗಾರಿಗಳು ಅಪೂರ್ಣಗೊಂಡಿರುವುದಿಲ್ಲ.<br><br>07 ಯಾತ್ರಿನಿವಾಸ ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ. ಸದರಿ ಯಾತ್ರಿನಿವಾಸಗಳ ವಿವರಗಳನ್ನು ಅನುಬಂಧ-2 ರಲ್ಲಿ ನೀಡಿದೆ. |

(2..

| (1) | (2) | (3) |
|---|---|---|
| ಇ) | ಕಾಮಗಾರಿ ಪೂರ್ಣಗೊಂಡು ಉದ್ಘಾಟನೆಯಾಗದಿರುವ ಯಾತ್ರಿ ನಿವಾಸಗಳ ಸಂಖ್ಯೆ ಎಷ್ಟು; ಈ ಬಗ್ಗೆ ಸರ್ಕಾರದ ತೆಗೆದುಕೊಂಡ ಕ್ರಮಗಳೇನು? | 01 ಯಾತ್ರಿನಿವಾಸ ಹಾಗೂ 01 ಡಾರ್ಮಿಟರಿಕಾಮಗಾರಿ ಪೂರ್ಣಗೊಂಡಿರುತ್ತದೆ. ವಿವರ ಕೆಳಗಿನಂತಿದೆ.<br><br>ನಾಗಮಂಗಲ ತಾಲ್ಲೂಕುಕೋಟೆ ಬೆಟ್ಟದಶ್ರೀ ಕಂಬದ ನರಸಿಂಹಸ್ವಾಮಿ ದೇವಾಲಯದ ಬೆಟ್ಟ ಪ್ರದೇಶದಲ್ಲಿ ಯಾತ್ರಿನಿವಾಸ ನಿರ್ಮಾಣ ನಾಗಮಂಗಲ ತಾಲ್ಲೂಕಿನ ಮುಳುಕಟ್ಟೆ ಗ್ರಾಮದ ಶ್ರೀ ಮುಳುಕಟ್ಟಮ್ಮ ದೇವಿಯ ದೇವಸ್ಥಾನದ ಬಳ ಡಾರ್ಮಿಟರಿ ನಿರ್ಮಾಣ ಮೇಲ್ಕಂಡ 02 ಕಾಮಗಾರಿಗಳು ಜೂನ್-2019 ರಲ್ಲಿ ಪೂರ್ಣಗೊಂಡಿರುತ್ತದೆ. ಈ ಕಾಮಗಾರಿಗಳನ್ನು ಉದ್ಘಾಟಿಸುವ ಸಂಬಂಧ ಸೂಕ್ತ ಸಮಯ ಮತ್ತು ದಿನಾಂಕ ನಿಗದಿಪಡಿಸಿಕೊಡುವಂತೆ ಕೋರಿ ಮಾನ್ಯ ಸಣ್ಣ ನೀರಾವರಿ ಹಾಗೂ ಮಂಡ್ಯ ಜಿಲ್ಲಾ ಉಸ್ತುವಾರಿ ಸಚಿವರು ಹಾಗೂ ಮಾನ್ಯ ಶಾಸಕರು, ನಾಗಮಂಗಲ ವಿಧಾನಸಭಾ ಕ್ಷೇತ್ರ ರವರುಗಳಿಗೆ ಜೂನ್-2019 ರ ಮಾಹೆಯಲ್ಲಿ ಪತ್ರ ಬರೆಯಲಾಗಿದೆ. ಮಾನ್ಯರ ಜೊತೆ ಚರ್ಚಿಸಲಾಗಿದ್ದು ಸೂಕ್ತ ದಿನಾಂಕ ಮತ್ತು ಸಮಯ ನಿಗದಿಪಡಿಸಿ ಸೂಕ್ತ ಕ್ರಮ ಕೈಗೊಳ್ಳಲಾಗುವುದು.<br><br>ಮಾನ್ಯರಿಂದ ದಿನಾಂಕ ಮತ್ತು ಸಮಯ ನಿಗದಿಯಾದ ಕೂಡಲೇ ಕಾಮಗಾರಿಗಳನ್ನು ಉದ್ಘಾಟಿಸಲಾಗುವುದು. |

ಪ್ರಇ 35 ಪ್ರವಾವಿ 2019

(ಸಾ.ರಾ.ಮಹೇಶ್)
ಪ್ರವಾಸೋದ್ಯಮ ಮತ್ತು ರೇಷ್ಮೆ ಸಚಿವರು

# ಅನುಬಂಧ-1-669

## ಮಂಡ್ಯಜಿಲ್ಲೆ ವ್ಯಾಪ್ತಿಯ ವಿವಿಧ ಪ್ರವಾಸಿ ತಾಣಗಳಲ್ಲಿ ಈವರೆಗೆ ನಿರ್ಮಾಣ ಮಾಡಿರುವಯಾತ್ರಿನಿವಾಸ/ಡಾರ್ಮಿಟರಿಗಳ ತಾಲ್ಲೂಕುವಾರು ವಿವರ

(ರೂ.ಲಕ್ಷಗಳಲ್ಲಿ)

| ಕ್ರ.ಸಂ | ಕಾಮಗಾರಿಯ ಹೆಸರು | ಅಂದಾಜು ಮೊತ್ತ |
|---|---|---|
| | ಮಂಡ್ಯತಾಲ್ಲೂಕು | |
| 01 | ಮಂಡ್ಯತಾಲ್ಲೊಕಿನ ಸಾತನೂರುಕಂಬದ ನರಸಿಂಹಸ್ವಾಮಿ ದೇವಲಾಯದ ಬಳ ಯಾತ್ರಿನಿವಾಸ ನಿರ್ಮಾಣ. | 50.00 |
| | ಶ್ರೀರಂಗಪಟ್ಟಣತಾಲ್ಲೂಕು | |
| 02 | ಶ್ರೀರಂಗಪಟ್ಟಣ ತಾಲ್ಲೊಕಿನ ಶ್ರೀಆದಿನಾಥತೀರ್ಥಂಕರರ ಸೇವಾ ಟ್ರಸ್ಟ್ ಬಳ ಯಾತ್ರಿನಿವಾಸ ನಿರ್ಮಾಣಯೋಜನೆ. | 100.00 |
| | ನಾಗಮಂಗಲತಾಲ್ಲೂಕು | |
| 03 | ಮಂಡ್ಯಜಿಲ್ಲೆಯ ನಾಗಮಂಗಲ ತಾಲ್ಲೂಕುಕೋಟೆ ಬೆಟ್ಟದ ಶ್ರೀ ಕಂಬದನರಸಿಂಹಸ್ವಾಮಿ ದೇವಾಲಯದ ಬೆಟ್ಟ ಪ್ರದೇಶದಲ್ಲಿಯಾತ್ರಿನಿವಾಸ ನಿರ್ಮಾಣ | 100.00 |
| 04 | ಮಂಡ್ಯಜಿಲ್ಲೆಯ ನಾಗಮಂಗಲ ತಾಲ್ಲೂಕು, ಶ್ರೀ ಸೌಮ್ಯಕೇಶವದೇವಾಲಯದ ಬಳ ಡಾರ್ಮಿಟರಿ ನಿರ್ಮಾಣ. | 49.46 |
| 05 | ನಾಗಮಂಗಲ ತಾಲ್ಲೊಕಿನ ಮುಳುಕಟ್ಟೆ ಗ್ರಾಮದ ಶ್ರೀ ಮುಳುಕಟ್ಟಮ್ಮ ದೇವಿಯದೇವಸ್ಥಾನದ ಬಳ ಡಾರ್ಮಿಟರಿ ನಿರ್ಮಾಣ | 40.00 |
| | ಪಾಂಡವಪುರತಾಲ್ಲೂಕು | |
| 06 | ಪಾಂಡವಪುರತಾಲ್ಲೂಕಿನ ಹರವುಗ್ರಾಮದ ಪ್ರಾಚೀನ ಸ್ಮಾರಕರಾಮದೇವರದೇಗುಲ ಪ್ರದೇಶದಲ್ಲಿಡಾರ್ಮಿಟರಿ ನಿರ್ಮಾಣ | 40.00 |
| 07 | ಪಾಂಡವಪುರತಾಲ್ಲೂಕಿನಕುಂತಿಬೆಟ್ಟದಲ್ಲಿಡಾರ್ಮಿಟರಿ ನಿರ್ಮಾಣ. | 40.00 |
| | ಕೆ.ಆರ್.ಪೇಟೆತಾಲ್ಲೂಕು | |
| 08 | ಮಂಡ್ಯಜಿಲ್ಲೆ, ಕೆ.ಆರ್.ಪೇಟೆತಾಲ್ಲೂಕು ಅಂಬಿಗರಹಳ್ಳಿ ಗ್ರಾಮದ ಶ್ರೀ ಸಂಗಮೇಶ್ವರದೇವಸ್ಥಾನದ ಹತ್ತಿರಯಾತ್ರಿನಿವಾಸ ನಿರ್ಮಾಣ | 80.00 |
| 09 | ಮಂಡ್ಯಜಿಲ್ಲೆಯ ಕೆ.ಆರ್.ಪೇಟೆತಾಲ್ಲೂಕು, ಕಿಕ್ಕೇರಿಗ್ರಾಮದ ಶ್ರೀ ಕಿಕ್ಕೇರಮ್ಮದೇವಸ್ಥಾನದ ಹತ್ತಿರಯಾತ್ರಿನಿವಾಸ ನಿರ್ಮಾಣ | 80.00 |
| 10 | ಮಂಡ್ಯಜಿಲ್ಲೆಯ ಕೆ.ಆರ್.ಪೇಟೆತಾಲ್ಲೂಕು ಅಕ್ಕಿಹೆಬ್ಬಾಳು ಗ್ರಾಮದ ಶ್ರೀ ಲಕ್ಷ್ಮೀನರಸಿಂಹಸ್ವಾಮಿ ದೇವಸ್ಥಾನದ ಹತ್ತಿರಯಾತ್ರಿನಿವಾಸ ನಿರ್ಮಾಣ. | 80.00 |
| | ಒಟ್ಟು | 659.46 |

—****—

# ಅನುಬಂಧ-2-669

## ಮಂಡ್ಯಜಿಲ್ಲೆ ವ್ಯಾಪ್ತಿಯ ವಿವಿಧ ಪ್ರವಾಸಿ ತಾಣಗಳಲ್ಲಿ ಪ್ರಗತಿಯಲ್ಲಿರುವಯಾತ್ರಿನಿವಾಸ/ಡಾರ್ಮಿಟರಿಗಳ ತಾಲ್ಲೂಕುವಾರು ವಿವರ

(ರೂ.ಲಕ್ಷಗಳಲ್ಲಿ)

| ಕ್ರ.ಸಂ | ಕಾಮಗಾರಿಯ ಹೆಸರು | ಅಂದಾಜು ಮೊತ್ತ |
|---|---|---|
| | ಮಂಡ್ಯತಾಲ್ಲೂಕು | |
| 01 | ಮಂಡ್ಯತಾಲ್ಲೋಕಿನ ಹೊಳಲು ಗ್ರಾಮದಲ್ಲಿರುವ ಶ್ರೀ ತಾಂಡವೇಶ್ವರ ಸ್ವಾಮಿದೇವಾಲಯದ ಬಳ ಯಾತ್ರಿ ನಿವಾಸ ನಿರ್ಮಾಣ | 25.00 |
| | ಮಳವಳ್ಳಿತಾಲ್ಲೂಕು | |
| 02 | ಮಳವಳ್ಳಿ ತಾಲ್ಲೂಕುಹಲಗೂರು ಹೋ॥ ಬಸವನಬೆಟ್ಟಗ್ರಾಮದ ಬಸವೇಶ್ವರದೇವಾಲಯದ ಬಳ ಯಾತ್ರಿನಿವಾಸ ನಿರ್ಮಾಣ | 50.00 |
| 03 | ಮಳವಳ್ಳಿ ತಾಲ್ಲೂಕಿನಚಿಕ್ಕಮುತ್ತತಿಗ್ರಾಮದ ಶ್ರೀ ಆಂಜನೇಯ ಸ್ವಾಮಿದೇವಾಲಯದ ಬಳ ಯಾತ್ರಿನಿವಾಸ ನಿರ್ಮಾಣ | 50.00 |
| | ಮದ್ದೂರುತಾಲ್ಲೂಕು | |
| 04 | ಮದ್ದೂರುತಾಲ್ಲೋಕಿನ ನಗರಕೆರೆ ಶ್ರೀ ಪಟ್ಟಲಾಂಭದೇವಸ್ಥಾನದ ಬಳ ಯಾತ್ರಿನಿವಾಸ ನಿರ್ಮಾಣ | 80.00 |
| | ಪಾಂಡವಪುರತಾಲ್ಲೂಕು | |
| 05 | ಪಾಂಡವಪುರತಾಲ್ಲೋಕಿನಕಟ್ಟೆರಿಗ್ರಾಮ ಪಂಚಾಯಿತಿ ವ್ಯಾಪ್ತಿಯದುದ್ದಘಟ್ಟಗ್ರಾಮದಲ್ಲಿರುವ ಶ್ರೀ ಆಂಜನೇಯ ಸ್ವಾಮಿದೇವಸ್ಥಾನದ ಬಳ ದಾರ್ಮಿಟರಿ ನಿರ್ಮಾಣಯೋಜನೆ. | 35.00 |
| 06 | ಪಾಂಡವಪುರತಾಲ್ಲೋಕಿನ ಕ್ಯಾತನಹಳ್ಳಿ ಗ್ರಾಮದ ಶ್ರೀ ಸ್ವಾಮಿ ವಿವೇಕಾನಂದ ಮಂದಿರದ ಬಳ ಯಾತ್ರಿನಿವಾಸ ನಿರ್ಮಾಣಕಾಮಗಾರಿ | 50.00 |
| | ಕೆ.ಆರ್.ಪೇಟೆತಾಲ್ಲೂಕು | |
| 07 | ಕೆ.ಆರ್.ಪೇಟೆತಾಲ್ಲೊಕಿನ ಕಲ್ಲಹಳ್ಳಿ ಗ್ರಾಮದ ಲಕ್ಷ್ಮಿ ಭೂವರಹನಾಥದೇವಾಲಯದ ಬಳ ಯಾತ್ರಿನಿವಾಸ ನಿರ್ಮಾಣ. | 60.00 |
| | ಒಟ್ಟು | 350.00 |

—*****—